KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೨೫, ೨೦೦೬ (ಜೇಷ್ಠ ೪, ಶಕವರ್ಷ ೧೯೨೮) | ಸಂಚಿಕೆ ೨೧ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 4 ಡಿಎಸ್‌ಡಬ್ಲ್ಯೂ 2006, ದಿನಾಂಕ: 15ನೇ ಮೇ 2006.**

**ವಿಷಯ:** ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿ ಸಚಿವಾಲಯ ಉಪಾಹಾರ ಮಂದಿರವನ್ನು ನಡೆಸುವ ಬಗ್ಗೆ

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ<br>ಸಿಆಸುಇ (ಕಾರ್ಯಕಾರಿ-1)<br>ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ,<br>ಬೆಂಗಳೂರು-560 001 |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 15-6-2006ರ ಮಧ್ಯಾಹ್ನ 3-00 ಗಂಟೆವರೆಗೆ |
| ಟೆಂಡರ್ ನಮೂನೆಯ ದರ | : | ರೂ. 500 + 63 ಮೌಲ್ಯವರ್ಧಿತ ತೆರಿಗೆ = ಒಟ್ಟು ರೂ. 563/- |

1) ಕರ್ನಾಟಕ ಸರ್ಕಾರ ಸಚಿವಾಲಯ ಉಪಾಹಾರ ಮಂದಿರದ ವಿಧಾನಸೌಧ ಶಾಖೆಯನ್ನು ದಿನಾಂಕ: 29-6-2006ರಿಂದ ದಿನಾಂಕ: 28-6-2007ರ ಒಂದು ವರ್ಷದ ಅವಧಿಗೆ ಮತ್ತು ಬಹುಮಹಡಿ ಕಟ್ಟಡದ ಶಾಖೆಯನ್ನು ದಿನಾಂಕ: 20-6-2006ರಿಂದ 19-6-2007ರ ಒಂದು ವರ್ಷದ ಅವಧಿಗೆ ನಡೆಸುವ ಗುತ್ತಿಗೆ ನೀಡಲು ಪ್ರತ್ಯೇಕ ಟೆಂಡರ್‌ಗಳನ್ನು ಸಲ್ಲಿಸತಕ್ಕದ್ದು.
2) ಎರಡೂ ಸ್ಥಳಗಳಲ್ಲಿ ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವವರು ಎರಡು ಪ್ರತ್ಯೇಕ ಟೆಂಡರ್‌ಗಳನ್ನು ಸಲ್ಲಿಸತಕ್ಕದ್ದು. ಒಂದೇ ಸ್ಥಳದಲ್ಲಿ ಉಪಾಹಾರ ಮಂದಿರವನ್ನು ನಡೆಸಲು ಇಚ್ಛೆಪಡುವವರು ಒಂದೇ ಟೆಂಡರ್‌ನ್ನು ಮಾತ್ರ ಸಲ್ಲಿಸಬಹುದಾಗಿದೆ.
3) ವಿಧಾನಸೌಧದ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂಪಾಯಿ ಒಂದು ಲಕ್ಷಕ್ಕೆ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.
4) ಬಹುಮಹಡಿ ಕಟ್ಟಡದಲ್ಲಿ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂಪಾಯಿ ಮೂರು ಲಕ್ಷಕ್ಕೆ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.
5) ಈ ಬ್ಯಾಂಕ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ಬೆಂಗಳೂರು" ಇವರ ಹೆಸರಿಗೆ ಬರೆಯತಕ್ಕದ್ದು
6) ಮುಂಗಡ ಠೇವಣಿ ಹಣದ ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಟೆಂಡರ್ ಜೊತೆಗೆ ಸಲ್ಲಿಸದಿದ್ದಲ್ಲಿ ನೀಡಿರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು
7) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 15-6-2006ರ ಮಧ್ಯಾಹ್ನ 3-00 ಗಂಟೆಯವರೆಗೆ ಮೊಹರು ಮಾಡಿದ ಲಕೋಟೆಗಳನ್ನು ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.

8) ದಿನಾಂಕ: 16-6-2006ರ ಮಧ್ಯಾಹ್ನ 3-30 ಗಂಟೆಗೆ ಸರಿಯಾಗಿ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆ.ಸು) ಬಹುಮಹಡಿ ಕಟ್ಟಡ, 5ನೇ ಹಂತ, 1ನೇ ಮಹಡಿ, ಇವರ ಕೊಠಡಿಯಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರನ್ನು ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಹಾಜರಿರಬಹುದು.
9) ಟೆಂಡರ್ ನಮೂನೆಯ ದರ ರೂ. 563-00 ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದುಕೊಂಡು, ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇಲ್ಲಿಂದ ಪಡೆಯಬಹುದಾಗಿದೆ. ಟೆಂಡರ್‌ನ್ನು ಒಪ್ಪಿಕೊಳ್ಳುವ ಅಂತಿಮ ಅಧಿಕಾರವನ್ನು ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರು ಹೊಂದಿರುತ್ತಾರೆ.
10) ಈ ಉಪಾಹಾರ ಮಂದಿರಗಳನ್ನು ಅಂಶ-1ರಂತೆ 1 (ಒಂದು) ವರ್ಷದ ಅವಧಿಗೆ ನಡೆಸಲು ಅನುಮತಿ ನೀಡಲಾಗುವುದು. ಯಾವುದೇ ಹಂತದಲ್ಲೂ 30 ದಿನಗಳ ನೋಟೀಸ್ ನೀಡುವ ಮೂಲಕ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.
11) ಸದರಿ ಟೆಂಡರ್‌ಗಳ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ವಿಧಾನಸೌಧ ಉಪಾಹಾರ ಮಂದಿರ" ಅಥವಾ "ಕರ್ನಾಟಕ ಸರ್ಕಾರ ಸಚಿವಾಲಯದ ಬಹುಮಹಡಿ ಕಟ್ಟಡ ಉಪಾಹಾರ ಮಂದಿರ" ಎಂದು ನಮೂದಿಸಿರತಕ್ಕದ್ದು.
12) ಟೆಂಡರ್‌ದಾರರು ತನ್ನ ಟೆಂಡರ್‌ಗಳಿಗೆ ಪೂರ್ಣ ಹೆಸರಿನೊಂದಿಗೆ ಸಹಿ ಹಾಕಿರಬೇಕು. ಅದು ಒಂದು ಸಂಸ್ಥೆಯ ಪರವಾಗಿ ಹಾಕಿದಲ್ಲಿ, ವ್ಯವಸ್ಥಾಪಕ ಪಾಲುದಾರನ ಹೆಸರಿನೊಂದಿಗೆ ಸಹಿ ಹಾಕಿರಬೇಕು
13) ಪ್ರತಿಯೊಬ್ಬ ಟೆಂಡರುದಾರನು ತನ್ನ ವಾಸ ಸ್ಥಳ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು
14) ಅಯಶಸ್ವಿ ಟೆಂಡರ್‌ದಾರರ ಮುಂಗಡ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು
15) ಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಭದ್ರತಾ ಠೇವಣಿಯಾನ್ನಾಗಿ ಪರಿಗಣಿಸಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲಾಗುವುದು. ಟೆಂಡರ್ ಅವಧಿ ಮುಗಿದ ನಂತರ ಸರ್ಕಾರಕ್ಕೆ ಟೆಂಡರುದಾರರಿಂದ ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.
16) ಟೆಂಡರುದಾರರು, ನಿಗದಿಪಡಿಸಿರುವ ಪ್ರತಿಯೊಂದು ಆಹಾರ ಪದಾರ್ಥಗಳು, ಕಾಫಿ, ಟೀ ಇತ್ಯಾದಿಗಳಿಗೆ ಈ ಟೆಂಡರ್ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ದರ ಮತ್ತು ಪ್ರಮಾಣದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ, ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನ ಪರಿಷತ್ ಸಚಿವಾಲಯದ ಅಧಿಕಾರಿ : ನೌಕರರಿಗೆ ಸರಬರಾಜು ಮಾಡತಕ್ಕದ್ದು. ಇತರರಿಗೆ ಟೆಂಡರ್‌ದಾರರೇ ದರಗಳನ್ನು ನಿಗದಿಪಡಿಸಬಹುದು.
17) ವಿಧಾನಸೌಧದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ.12,000/- ಬಾಡಿಗೆ ಮತ್ತು ಬಹುಮಹಡಿ ಕಟ್ಟಡದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ. 35,000/- ಬಾಡಿಗೆಯನ್ನು ನಿಗದಿಪಡಿಸಲಾಗಿದೆ. ಅದಕ್ಕಿಂತ ಕಡಿಮೆ ಬಾಡಿಗೆ ನಮೂದಿಸಿದಲ್ಲಿ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.
18) ಯಶಸ್ವಿ ಟೆಂಡರ್‌ದಾರರು ಬೆಂಗಳೂರು ಮಹಾನಗರ ಪಾಲಿಕೆಯಿಂದ ಮತ್ತು ಸಂಬಂಧಪಟ್ಟ ಸರ್ಕಾರಿ ಇಲಾಖೆಗಳು / ಸಂಸ್ಥೆಗಳಿಂದ ಉಪಾಹಾರ ಮಂದಿರವನ್ನು ನಡೆಸಲು ಪರವಾನಗಿ ಪತ್ರ ಹಾಗೂ ನಿರಾಕ್ಷೇಪಣ ಪತ್ರ (No objection certificate) ಇತ್ಯಾದಿ ಅವಶ್ಯಕ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು.
19) ಯಶಸ್ವಿ ಟೆಂಡರ್‌ದಾರರು ಅಡುಗೆ ತಯಾರಿಸುವುದಕ್ಕಾಗಿ ಹಾಗೂ ಸರಬರಾಜು ಮಾಡುವುದಕ್ಕಾಗಿ ತಮ್ಮದೇ ಆದ ಅಡುಗೆ ಪಾತ್ರೆಗಳನ್ನು ಹಾಗೂ ಇತರೆ ವಸ್ತುಗಳನ್ನು ಒದಗಿಸಿಕೊಳ್ಳತಕ್ಕದ್ದು.
20) ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ ಹಾಗೂ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಸಲ್ಲಿಸದೇ ಇರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು
21) ದಿನಾಂಕ: 9-6-2006ರ ಮಧ್ಯಾಹ್ನ 3-00 ಗಂಟೆವರೆಗೆ ಮಾತ್ರ ಈ ಟೆಂಡರ್ ಅರ್ಜಿಗಳನ್ನು ಮಾರಾಟ ಮಾಡಲಾಗುವುದು
22) ಗೊತ್ತುಪಡಿಸಿದ ನಮೂನೆಯ ನಿಗದಿತ ಪಟ್ಟಿಯಲ್ಲಿನ ಯಾವುದೇ ಮಾರ್ಪಾಡುಗಳನ್ನು ಮಾಡಿರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು
23) ಯಶಸ್ವಿ ಟೆಂಡರುದಾರರು ಕರಾರು ಒಪ್ಪಂದ ಪತ್ರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ನಿಗದಿತ ಕರಾರು ಒಪ್ಪಂದ ಪತ್ರಕ್ಕೆ ಸಹಿ ಹಾಕಿ ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು
24) ಐದು ವರ್ಷಕ್ಕೂ ಮೇಲ್ಪಟ್ಟು ಸರ್ಕಾರಿ ಇಲಾಖೆಗಳು/ಪ್ರಮುಖ ಸಂಸ್ಥೆಗಳಲ್ಲಿ ಉಪಾಹಾರ ಮಂದಿರವನ್ನು ನಡೆಸಿರುವ ಅನುಭವ ಇದ್ದು, ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಪಾವತಿ ಮಾಡಿರುವಂತ ವ್ಯಕ್ತಿಗಳು ಹಾಗೂ ಸಂಸ್ಥೆಗಳ ಟೆಂಡರನ್ನು ಮಾತ್ರ ಸ್ವೀಕರಿಸಲಾಗುವುದು. ಈ ಬಗ್ಗೆ ಟೆಂಡರ್‌ದಾರರು ದಾಖಲೆಗಳೊಂದಿಗೆ ಸಂಪೂರ್ಣ ವಿವರ ನೀಡುವುದು
25) ಯಾವುದೇ ವ್ಯಾಜ್ಯ ಉಂಟಾದಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಬೆಂಗಳೂರಿನಲ್ಲಿರುವ ನ್ಯಾಯಾಲಯಗಳಿಗೆ ಮಾತ್ರ ಅಧಿಕಾರ ಇದೆ.

26) ಉಪಾಹಾರ ಮಂದಿರವನ್ನು ಸ್ವಚ್ಛವಾಗಿ ಇಡುವುದಲ್ಲದೇ, ಸೋಂಕು ರೋಗ, ಇಲಿ, ನೊಣ, ಸೊಳ್ಳೆ ಇತ್ಯಾದಿ ಸಮಸ್ಯೆಗಳು ಉಂಟಾಗದಂತೆ ದಿನಂಪ್ರತಿ ಔಷಧಿಯನ್ನು ಸಿಂಪಡಿಸತಕ್ಕದ್ದು

27) ಈ ಉಪಾಹಾರ ಮಂದಿರದಲ್ಲಿ ಆರೋಗ್ಯಕರವಾದ ಮತ್ತು ಶುಚಿ-ರುಚಿಯಾದ ತಿಂಡಿ-ತಿನಿಸುಗಳನ್ನು ತಯಾರಿಸತಕ್ಕದ್ದು

28) ಇಲ್ಲಿ ನೀಡುವ ತಿಂಡಿ-ತಿನಿಸು, ಆಹಾರ ಪದಾರ್ಥಗಳನ್ನು ತಿಂದು ಅಸ್ವಸ್ಥರಾದರೆ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಉಪಾಹಾರ ಮಂದಿರದ ಮಾಲೀಕರೇ ಸಂಪೂರ್ಣ ಜವಾಬ್ದಾರರು

29) ಉಪಾಹಾರ ಮಂದಿರ ನಡೆಸುವಲ್ಲಿ ಸಂಪೂರ್ಣ ಜವಾಬ್ದಾರಿ ವಹಿಸಿಕೊಳ್ಳುವ ವ್ಯಕ್ತಿ ಮತ್ತು ಯಾವುದೇ ತಪ್ಪು ಕೆಲಸ, ಅವ್ಯವಸ್ಥಿತ ನಿರ್ವಹಣೆ ಅಥವಾ ಅಪಘಾತವಾದಲ್ಲಿ ಜವಾಬ್ದಾರಿ ಹೊತ್ತು ಸೂಕ್ತ ಪರಿಹಾರ ನೀಡುವ ಮಾಲೀಕರ / ಪಾಲುದಾರರ ಅಥವಾ ಸಂಸ್ಥೆಯ ಜವಾಬ್ದಾರಿಯುತ ಮಾಲೀಕರ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.

30) ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

31) ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದ ಒಟ್ಟು ವಿಸ್ತೀರ್ಣ 317.24 sq.mtr. ವಿಧಾನಸೌಧದ ಉಪಾಹಾರ ಮಂದಿರದ ಒಟ್ಟು ವಿಸ್ತೀರ್ಣ 186.62 sq.mtr. ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ತಕ್ಷಣಕ್ಕೆ ತಿಂಡಿಗಳನ್ನು ತಯಾರಿಸಲು ಅವಕಾಶವಿದೆ. ಪೂರ್ಣ ಪ್ರಮಾಣದ ಅಡುಗೆ ಕೋಣೆ ಇರುವುದಿಲ್ಲ. ವಿಧಾನಸೌಧದ ಉಪಾಹಾರ ಮಂದಿರದಲ್ಲಿ ಅಡುಗೆ ಮಾಡಲು ಅವಕಾಶ ಇರುವುದಿಲ್ಲ. ತಿಂಡಿ ಪದಾರ್ಥಗಳನ್ನು ಬೇರೆ ಕಡೆಯಿಂದ ಮಾಡಿ ಸಿಬ್ಬಂದಿ ವರ್ಗದವರಿಗೆ ಸರಬರಾಜು ಮಾಡುವುದು. ಟೆಂಡರ್‌ದಾರರು ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದ ಸ್ಥಳದ ಪರಿವೀಕ್ಷಣೆ ಮಾಡಬಹುದು.

32) ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸಭೆ ಸಚಿವಾಲಯ ಮತ್ತು ವಿಧಾನ ಪರಿಷತ್ತಿನ ಸಚಿವಾಲಯದ ಸಿಬ್ಬಂದಿಗೆ ಅವರು ಗುರುತಿನ ಚೀಟಿಯನ್ನು ತೋರಿಸಿದಲ್ಲಿ ಈ ಕೆಳಗಿನ ತಿಂಡಿ ತಿನಿಸು, ಕಾಫೀ, ಟೀ ಇತ್ಯಾದಿಗಳನ್ನು ಅವುಗಳ ಮುಂದೆ ನಿಗದಿಪಡಿಸಿರುವ ಪ್ರಮಾಣ ಮತ್ತು ದರದಲ್ಲಿ ಅವುಗಳನ್ನು ಒದಗಿಸತಕ್ಕದ್ದು.

| ಕ್ರ.ಸಂ. | ಕಾಫೀ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 01 | ಇಡ್ಲಿ | 75 gm | 2/- ಒಂದಕ್ಕೆ |
| 02 | ವಡೆ | 100 gm | 4/- ಒಂದಕ್ಕೆ |
| 03 | ರವೆ ಇಡ್ಲಿ | 125 gm | 7-00 ಒಂದಕ್ಕೆ |
| 04 | ಖಾರಾಬಾತ್ | 100gm | 3.50 |
| 05 | ಚೌಚೌ ಬಾತ್ | 200gm | 7/- |
| 06 | ಪಕೋಡ | 100gm | 6/- |
| 07 | ರೈಸ್ ಬಾತ್ | 300gm | 5/- |
| 08 | ಅನ್ನ ಸಾಂಬಾರ್ | 325gm | 5/- |
| 09 | ಮಸಾಲಾ ದೋಸೆ | 250gm | 7/- |
| 10 | ಸೆಟ್ ದೋಸೆ | 250gm | 7/- |
| 11 | ಪೂರಿ | 250gm | 7/- |
| 12 | ಕಾಫಿ/ಟೀ | 100 ಔನ್ಸ್ | 3/- |
| 13 | ಬೋಂಡಾ | 100gm | 6/- |
| 14 | ಲಂಚ್ (ಅನ್ನ, ಸಾಂಬಾರ್, ರಸಮ್, ಮೊಸರು, ಪಲ್ಯ, ಚಪಾತಿ/ಪೂರಿ/ರಾಗಿ ಮುದ್ದೆ) | 500 gm | 14/- |
| 15 | ಉದ್ದಿನವಡೆ | 100 gm | 4/- ಒಂದಕ್ಕೆ |
| 16 | ಮಸಾಲೆ ವಡೆ | 150 gm | 6/- ಎರಡಕ್ಕೆ |

ಇತರ ಆಹಾರ ಪದಾರ್ಥಗಳಿಗೆ ಟೆಂಡರುದಾರರೇ ಸೂಕ್ತ ದರ ನಿಗದಿಪಡಿಸಿ ಮಾರಾಟ ಮಾಡಬಹುದಾಗಿದೆ.

33) ಉಪಾಹಾರ ಮಂದಿರ ಮತ್ತು ಅದರ ಆವರಣದಲ್ಲಿ ಇನ್ನಾವುದೇ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವಂತಿಲ್ಲ

34) ಈ ಉಪಾಹಾರ ಮಂದಿರವನ್ನು ಕಚೇರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 9-00 ರಿಂದ ಸಂಜೆ 6-30 ಗಂಟೆವರೆಗೆ ಮಾತ್ರ ನಡೆಸತಕ್ಕದ್ದು ಮತ್ತು ಸಾರ್ವಜನಿಕ ರಜಾ ದಿನಗಳಲ್ಲಿ ಈ ಉಪಾಹಾರ ಮಂದಿರವನ್ನು ನಡೆಸುವಂತಿಲ್ಲ. ಈ ಉಪಾಹಾರ ಮಂದಿರದಲ್ಲಿ ನಿಗದಿತ ವೇಳೆಯ ನಂತರ ಉಪಾಹಾರ ಮಂದಿರದ ಯಾವುದೇ ಸಿಬ್ಬಂದಿ/ನೌಕರರು ಇರುವಂತಿಲ್ಲ. ಈ ಉಪಾಹಾರ ಮಂದಿರಗಳಿಗೆ ಸಾರ್ವಜನಿಕರ ಪ್ರವೇಶವು ಸರ್ಕಾರವು ಕಾಲಾನುಕಾಲದಲ್ಲಿ ನಿಗದಿಪಡಿಸುವ ನಿರ್ಬಂಧಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 277

**ಹೆಚ್.ಕೆ ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಕಾರ್ಯಕಾರಿ-1)

ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ5.ಕಟ್ಟಡ.ದಾಸ್ತಾನು ಮಳಿಗೆ.ಸಿಆರ್-52 / 05-06, ದಿನಾಂಕ:.15ನೇ ಮೇ 2006**

**ವಿಷಯ:-** 2006-07ನೇ ಸಾಲಿನಲ್ಲಿ ಬೆಂಗಳೂರು ನಗರ ವಿಭಾಗದ ಜಾರಕಬಂಡೆ ವಸತಿ ಸಂಕೀರ್ಣ ಆವರಣದಲ್ಲಿ ದಾಸ್ತಾನು ಮಳಿಗೆ ರಕ್ಷಣಾ ಗೋಡೆ ಎತ್ತರಿಸುವುದು.

**ಉಲ್ಲೇಖ:-** ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಎ2. ಅಸಂ(ಬೆಂ). ಬಿಯುಡಿ. ಸಿಆರ್-10/05-06 ದಿನಾಂಕ: 31.03.2006.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ ವ್ಯಾಪ್ತಿಯ ಜಾರಕಬಂಡೆ ವಸತಿ ಸಂಕೀರ್ಣ ಆವರಣದಲ್ಲಿ ದಾಸ್ತಾನು ಮಳಿಗೆ ರಕ್ಷಣಾ ಗೋಡೆ ಎತ್ತರಿಸಲು ಈ ವಿಭಾಗದಿಂದ 2006-07ನೇ ಸಾಲಿನಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ದಿನಾಂಕ: 29.05.2006 ರಂದು ಮೊಹರಾದ ಟೆಂಡರ್ ಕರೆಯಲಾಗಿದೆ. ಟೆಂಡರ್‌ನ್ನು ದಿನಾಂಕ: 29.05.2006ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕ: 29.05.2006 ರಂದು ಯಾವ ಟೆಂಡರ್‌ದಾರರು ಟೆಂಡರ್‌ನಲ್ಲಿ ಭಾಗವಹಿಸದಿದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ಪರಿಗಣಿಸಿ ದಿನಾಂಕ: 30.05.2006ರಂದು ಸಂಜೆ 4.00 ಗಂಟೆಗೆ ಮೊಹರಾದ ಮರು ಟೆಂಡರ್ ಸ್ವೀಕರಿಸಲಾಗುವುದು. ಟೆಂಡರ್ ಫಾರಂನ್ನು ಅನುಕ್ರಮವಾಗಿ ದಿನಾಂಕ: 29.05.2006 ಮತ್ತು 30.05.2006 ರಂದು ಈ ಕಛೇರಿಯಲ್ಲಿ ಕಛೇರಿ ಕೆಲಸದ ದಿನ ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಪಡೆಯಬಹುದಾಗಿರುತ್ತದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ವಲಯ | ಕೆಲಸದ ವಿವರ | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ಇಡಿಗಂಟು) |
|---|---|---|---|---|
| 1 | ಬೆಂಗಳೂರು ವಲಯ | ಜಾರಕಬಂಡೆ ದಾಸ್ತಾನು ಮಳಿಗೆ ರಕ್ಷಣಾ ಗೋಡೆ ಎತ್ತರಿಸುವುದು ಹಾಗೂ ಅಗತ್ಯ ದುರಸ್ತಿ ಕಾಮಗಾರಿ ಕೈಗೊಳ್ಳುವುದು | 2.08 | 5200/- |

**ನಿಬಂಧನೆಗಳು**

1. ಟೆಂಡರ್‌ದಾರರು 2006-07ನೇ ಸಾಲಿನಲ್ಲಿ ಈ ವಿಭಾಗದಿಂದ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ಅಂದಾಜು ವೆಚ್ಚದ ಶೇಕಡ 2.5% ಇ.ಎಂ.ಡಿ. ಹಣವನ್ನು (ಮೇಲಿನ ಷೆಡ್ಯೂಲ್‌ನಲ್ಲಿ ವಿವರಿಸಿದಂತೆ) ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಷೆಡ್ಯೂಲ್‌ನಲ್ಲಿ ವಿವರಿಸಿದ ಕಾಮಗಾರಿಗೆ ಸಲ್ಲಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು. ಟೆಂಡರ್ ಫಾರಂ ಮೊತ್ತ ರೂ.200/-(ತೆರಿಗೆಗಳು ಪ್ರತ್ಯೇಕ)
5. ಟೆಂಡರ್ ಫಾರಂಗಳನ್ನು ಅನುಕ್ರಮವಾಗಿ ದಿನಾಂಕ: 29.05.2006 ಮತ್ತು 30.05.2006ರ ಸಂಜೆ 4.00 ಗಂಟೆ ವೇಳೆಯವರೆಗೆ ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕಬೇಕು.
6. ದಿನಾಂಕ: 29.05.2006 ಮತ್ತು 30.05.2006ರ ಸಂಜೆ 5.00 ಗಂಟೆಗೆ ಹಾಜರಿರುವ ಗುತ್ತಿಗೆದಾರರ / ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
7. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಅಥವಾ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ಇವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
8. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ ಮೂರು ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200/- ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.
9. ಕೆಲಸದ ಆದೇಶ ನೀಡಿದ ದಿನಾಂಕದಿಂದ 45 (ನಲವತ್ತೈದು) ದಿನಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.
10. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
11. ಇಎಂಡಿ ಹಣವನ್ನು ಯಶಸ್ವಿ ಟಂಡರ್‌ದಾರರಿಗೆ ಕಾಮಗಾರಿ ಮುಗಿದು ಅಂದಾಜು ಪಟ್ಟಿ ಮುಕ್ತಾಯ ವರದಿಗಳನ್ನು ಸಲ್ಲಿಸಿದ ನಂತರ ಚೆಕ್ ಮೂಲಕ ಹಿಂದಿರುಗಿಸಲಾಗುವುದು.
12. ಗುತ್ತಿಗೆದಾರರು ಕಾಮಗಾರಿ ಪೂರ್ಣಗೊಂಡ ನಂತರ ನಿಗಧಿತ ನಮೂನೆಯಲ್ಲಿ ಬಿಲ್ಲುಗಳನ್ನು ಪಾವತಿಗಾಗಿ ತ್ರಿಪ್ರತಿಯಲ್ಲಿ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಈ ಕಛೇರಿಗೆ ಸಲ್ಲಿಸುವುದು.
13. ಪ್ರತಿ ಬಿಲ್‌ನಲ್ಲಿ ಶೇಕಡ 2% ರಷ್ಟನ್ನು ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾಜನ್ನು ತೆರಿಗೆಯಾಗಿ ನಿಯಮಾನುಸಾರ ಹಿಡಿಯಲಾಗುವುದು.
14. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ಆಕ್ಷೇಪಣೆಗಳು ವ್ಯಕ್ತವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ವೃತ್ತ ಬೆಂಗಳೂರು ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.

15. ಟೆಂಡರ್‌ದಾರರು ಶೆಡ್ಯೂಲ್‌ನಲ್ಲಿ ನಮೂದಿಸಿರುವ ದರಗಳಿಗೆ ಲೋಕೋಪಯೋಗಿ ಇಲಾಖೆಯ ೨೦೦೫-೦೬ನೇ ಸಾಲಿನ ಮಂಜೂರಾದ ದರಗಳ ಶೇಕಡವಾರು ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ನಮೂದಿಸಬೇಕು.

16. ಅಗತ್ಯವಾದ ಪೂರಕ ಕಾಮಗಾರಿಗಳು ನಿಗಧಿಪಡಿಸಿದ ದರದಲ್ಲಿ ಒಳಗೊಂಡಿರತಕ್ಕದ್ದು ಹೆಚ್ಚುವರಿ ಕಾಮಗಾರಿಗಳ ವೆಚ್ಚದ ಬಿಲ್‌ಗಳನ್ನು ಪರಿಗಣಿಸಲಾಗುವುದಿಲ್ಲ.

17. ಗುತ್ತಿಗೆ ಪಡೆದ ಹದಿನೈದು ದಿನಗಳೊಳಗೆ ಕೆಲಸ ಪ್ರಾರಂಭಿಸದಿದ್ದಲ್ಲಿ ಗುತ್ತಿಗೆದಾರರ ಸ್ವಂತ ಜವಾಬ್ದಾರಿ ಮತ್ತು ಖರ್ಚಿನಲ್ಲಿ ಸದರಿ ಕೆಲಸವನ್ನು ಬೇರೆ ಗುತ್ತಿಗೆದಾರರಿಗೆ ವಹಿಸಿ ಪೂರೈಸಲು ಅಥವಾ ಇಲಾಖಾ ಮೂಲಕ ಪೂರೈಸಲು ಸಂಪೂರ್ಣ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರಿಗೆ ಇರುತ್ತದೆ.

18. ಗುತ್ತಿಗೆದಾರರು ನಿಗಧಿತ ಅವಧಿಯಲ್ಲಿ ಕಾಮಗಾರಿ ಪೂರೈಸದಿದ್ದಲ್ಲಿ ಮತ್ತು ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿಗೆ ಹಣ ಪಾವತಿಗೆ ಅರ್ಹರಿರುವುದಿಲ್ಲ.

19. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲಿನ ಹಣ ಪಾವತಿಸಲಾಗುವುದು.

20. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.

21. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.

22. ಟೆಂಡರುದಾರರಿಗೆ ನೀಡಲಾದ ಮಾದರಿಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.

23. ಕೆಲಸದಲ್ಲಿ ಏನಾದರೂ ಬದಲಾವಣೆ : ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.

24. ಕಾಮಗಾರಿ ನಿರ್ವಹಣೆಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ಕೆಲಸಗಾರರಿಗೆ ಏನಾದರೂ ಅಪಘಾತ ಅಥವಾ ಯಾವುದೇ ತೊಂದರೆ ಉಂಟಾದಲ್ಲಿ ಅದಕ್ಕೆ ಗುತ್ತಿಗೆದಾರರೆ ಪೂರ್ಣ ಹೊಣೆಗಾರರಾಗಿರುತ್ತಾರೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು

ಪಿ.ಆರ್. 276

**IN THE COURT OF THE IV ADDL. CITY CIVIL JUDGE, MAYOHALL**
**BANGALORE**
**P. & S.C. 15017 / 2006,**

**PETITIONERS :**

1. Smt. Kamalamma
   Alias Rosy D'Souza
   W/o. late Sebastian D'Souza Allias Nagaraj
   R/ at. No. 147, 2nd Cross, 2nd Main Road,
   Vinayakanagar, Bangalore-30
2. Ragini alias Neetu
   D/o. Late Sabastian D'Souza Alias Nagaraj
   R/ at. No. 147, 2nd Cross, 2nd Main Road,
   Vinayakanagar, Bangalore-30.

**V/s**

**RESPONDENT**

The Superintendent of Post Offices,
Bangalore East Division,
Museum Road,
Bangalore-25.

**PUBLIC NOTICE**

Notice is hereby given that a petition has been made to this court under section 372 of the Indian Succession Act of 1925. Praying for grant of Succession Certificate in respect of the Death-cum-retirement benefits, family pension and other benefits of late Sebastian D'Souza who also called as Nagaraj, who died at Bangalore on 24.12.2002.

Be it known that no caveat has been entered and the said petition is posted for hearing on 01.06.2006. All persons claiming to have interest in the below mentioned schedule may come and participate in the proceedings before grant of Succession Certificate in favour of the petitioners.

Given under my hand and the seal of the Court dated this 8th day of May, 2006.

By Order of the Court,
Asst. Registrar,
City Civil Court, Mayohall Unit, Bangalore

**SCHEDULE**

Death-cum-retirement Benefits, Family Pension, Leave Salary, Group Insurance Scheme etc of late Sebastian D'Souza who was working as sorting postman, Vasanthnagar Post Office, Bangalore-560002, during the year 2002.

P.D. 61

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇಮಕಾತಿ ಆದೇಶ**

**ಜಿಲ್ಲಾ ನೋಂದಣಾಧಿಕಾರಿಗಳು, ಕಾರವಾರ ಇವರ ನಡವಳಿಗಳು**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಜಿನೋ : ಸಿಬ್ಬಂದಿ 27 / 2001-02, ದಿನಾಂಕ: 7.01.2002.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-02, ದಿನಾಂಕ: 01.08.2002 (ದಿನಾಂಕ: 08.08.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-02, ದಿನಾಂಕ: 23.11.2004.
5) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02, ದಿನಾಂಕ: 06.04.2006.

**ಪ್ರಸ್ತಾವನೆ:**

ಈ ಇಲಾಖೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಉತ್ತರ ಕನ್ನಡ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಜಿ.ನೊ / ಸಿಬ್ಬಂದಿ / 1 / 06-07, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5) ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.3000-75-3450-100-4450-125-5450ರ ವೇತನ

ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಕುಂತಿಬಾಯಿ ಲಕ್ಷ್ಮಣ ಕುಮಾರ ನಾಯಕ D/o ಲಕ್ಷ್ಮಣಾ ಯಲ್ಲಪ್ಪ ಕುಮಾರ ನಾಯಕ ಪೊ: ಗೋಕಾಕ ಫಾಲ್ಸ್ - 591308 ಮು: ವಾಲ್ಮೀಕಿ ನಗರ, ಮನೆ ನಂ. 2/1, ತಾ: ಗೋಕಾಕ, ಜಿಲ್ಲೆ: ಬೆಳಗಾವಿ. | ST | 01.06.69 | 33.03.06 | S.S.L.C. 58.000 | ಜಿಲ್ಲಾ ನೋಂದಣಿ ಕಛೇರಿ, ಕಾರವಾರ ಉತ್ತರ ಕನ್ನಡ ಜಿಲ್ಲೆ | ಪರಿಶಿಷ್ಟ ಪಂಗಡ ಅಂಗವಿಕಲ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 150086, ಏಪ್ರಿಲ್ 1985 (ವರ್ಷ) ರ ಪ್ರಕಾರ ಕುಂತೀಬಾಯಿ ಲಕ್ಷ್ಮಣ ಕುಮಾರ ನಾಯಕ ಇವರ ಜನ್ಮ ದಿನಾಂಕವು 01.06.1969 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್ ಪಡಿಸತಕ್ಕದ್ದು.

13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದು ಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,

ಪಿ.ಆರ್. 240 ಕಾರವಾರ, ಉತ್ತರ ಕನ್ನಡ ಜಿಲ್ಲೆ.

**PUBLIC WORKS DEPARTMENT**
**(NATIONAL HIGHWAY)**
**Office of The Executive Engineer, National Highway Division, Urva Store, Ashok nagar, Mangalore-575006**

**SHORT TERM TENDER NOTIFICATION**

**No: NHD / MNG / AE-1 / M&R / NIT / 2006-07 / 294, DATED: 26TH APRIL 2006**

Sealed item rate tenders in duplicate for the work noted below are invited from Class-I Registered contractors in KPWD on behalf of the Governor of Karnataka. The sealed tender shall be submitted either in the office of the Superintending Engineer, National Highway Circle, Bangalore or in this office upto 4.00 PM on 31.05.2006 subject to the conditions laid down in Form No. PWG-65 & 66 of KPWD code Vol-II and in Karnataka Transparancy Public Procurement ordinance 2000 and Act 2000. If possible the tenders will be opened at 4.30 PM on **31-05-2006** in this office.

Applications for Blank Tender Forms along with registration Certificate and cost of Blank Tender Documents in the form of D.D. (Non-refundable) will be received upto 4.30 PM on **30-05-2006**. The Blank Tender Forms will be issued up to **30-05-2006** in the office.

| Sl. No. | Name of Work | Amount put to Tender (In Rs) | E.M.D. (In Rs) | Cost of Tender Forms (in Rs) including taxes Non refundable | Nature of Work | Time for completion of work (including monsoon) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | M&R to NH-48 for 2006-07 - Restoration of damaged surface at the selected reaches of KM 259.00 to 270.00, KM 280.00 to 301.50 & KM 309.00 to 324.00 of NH-48, Bangalore - Mangalore section. | 18,16,600 | 27,300 | 7,500 | BM / SDBC | 15 days |

**CONDITIONS**

1 Each tenderer shall use following machinery and submit evidence of ownership / pocession as detailed below, **at the time of submission of application. The documents shall be attested by a District Level Officer and the originals shall be produced for verification at the timeof submission of application**, or otherwise the application will not be accepted.

| Machinery | Numbers | Evidence of ownership to be furnished |
|---|---|---|
| i) Hot Mix Plant of "Above 40 to 60 T.P.H." capacity (as per MOST specification) | 1 | Purchase invoice / Sale deed with a copy of Purchase invoice from the seller. |
| ii) Paver Finisher | 1 | - Do - |
| iii) Mechanical spravers | 2 | - Do - |
| iv) Vibratory Road Roller | 1 | - Do - |
| v) Static Road Roller | 2 | - Do - |
| vi) Tippers | 4 | Registration Certificate from R.T.O. with fitness certificate. |

2 The contractors interested in bidding for the work may submit an application to the undersigned along with cost of tender documents to be paid in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration, while submitting the application for tender schedules. Otherwise the application will not be considered.

3 Each Tenderer should have completed satisfactorily, similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contractor should have completed a billing of 30% of the value of the intended contract during the current financial year for similar works. The work experience certificate in this regard should invariably have mention of same nature / items of work executed, along with date of commencement and date of completion ; otherwise the application will not be accepted.

4 The **EMD** in the form of FDR / DD / Bankers Cheque / Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed. The Bank Guarantee Shall be in the Form as specified in PWG 66 supplied with the tender form. Otherwise tender will be rejected. Regarding the validity of EMD, tender condition etc. PWG-66 shall be referred and is binding on the tenderer.

5 The competent authority reserves the right to reject any or all tenders without assigning any reason there off.

6 The tendering by Joint venture is not allowed.

Any other details regarding the work can be obtained from the above office during office hours.

Executive Engineer,
National Highway Division, Mangalore.

PR. 245

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರರು, ಲೋ.ಇ. ವಿಭಾಗ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಕಾ.ಅ : ಶಿ.ವಿ.ಶಿ : ಎಇ-2 / ಸೇತುವೆ / 02 / 2006-07 / 268, ದಿನಾಂಕ: 28ನೇ ಏಪ್ರಿಲ್ 2006.**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್., ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲಡ್ಜ್ ಮಾಡಿಸತಕ್ಕದ್ದು.

**ನಿಬಂಧನೆಗಳು**

1) ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ: ಪಿ.ಡಬ್ಲ್ಯೂ.ಡಿ. 344 ಸಿ.ಆರ್.ಎಮ್ 2000 ದಿನಾಂಕ: 15.01.2002 ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.

2) ಈ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 1 ಸ್ವಯಂ ಚಾಲಿತ ಕಾಂಕ್ರೀಟ್ ಮಿಕ್ಸರ್, 2 ಪಿನ್ ವೈಬ್ರೇಟರ್, 1 ನೀರೆತ್ತುವ ಯಂತ್ರ, ಸೆಂಟರಿಂಗ್ ಪ್ಲೇಟ್‌ಗಳು ಹಾಗೂ ಇತರೆ ಅವಶ್ಯಕವಾದ ವಸ್ತುಗಳ ಮಾಲಿಕತ್ವ ಹೊಂದಿರಬೇಕು. ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಪತ್ರಗಳೊಂದಿಗೆ ಹಾಗೂ ಆದಾಯ ತೆರಿಗೆ, ವಾಣಿಜ್ಯ ತೆರಿಗೆ ಸಂದಾಯದ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು.

3) ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.

4) ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.

5) ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು, ಡಾಂಬರ್, ಆರ್.ಸಿ.ಸಿ. ಪೈಪುಗಳು ಇತ್ಯಾದಿ ಸಾಮಾಗ್ರಿಗಳನ್ನು ಐ.ಆರ್.ಸಿ. ಮತ್ತು ಐ.ಎಸ್.ಐ. ನಿರ್ಧಿಷ್ಟ ಪಡಿಸಿದ ಕ್ರಮವಾಗಿ ವಿವರಣೆ ಮತ್ತು ಉದ್ದೇಶಗಳಿಗನುಸಾರವಾದ, ಕಾಮಗಾರಿಗೆ ಬೇಕಾಗುವ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು. ಇಲಾಖೆಯಿಂದ ಯಾವುದೇ ಸಾಮಾಗ್ರಿಗಳನ್ನು ಸರಬರಾಜು ಮಾಡುವುದಿಲ್ಲ.

